KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೩ | ಬೆಂಗಳೂರು, ಗುರುವಾರ, ನವೆಂಬರ್ ೨೭, ೨೦೦೮ (ಮಾರ್ಗಶಿರ ೦೬, ಶಕ ವರ್ಷ ೧೯೩೦) | ಸಂಚಿಕೆ ೪೭ |
|---|---|---|

## ಭಾಗ – ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ನಂ:ಎಲ್.ಎನ್.ಡಿ(ಪೂ)ಸಿಆರ್:12/2008–09, ದಿನಾಂಕ: 9ನೇ ಸೆಪ್ಟೆಂಬರ್ 2008**

**ವಿಷಯ:** ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಚೀಮಸಂದ್ರ ಗ್ರಾಮದ ಸ.ನಂ. 83 ರಲ್ಲಿನ 3–25 ಎಕರೆ/ಗುಂಟೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ನಡವಳಿ ಆದೇಶದ ಸಂ.ಆರ್.ಡಿ:265:ಎಲ್‌ಜಿಬಿ:2007 (ಭಾ–6) ಬೆಂಗಳೂರು, ದಿನಾಂಕ:18.10.2007 ಮತ್ತು 13.05.2008, ನಂ.ಆರ್.ಡಿ:139 ಪಿಆರ್‌ಎಸ್:2008 ದಿನಾಂಕ: 05.04.2008ರ ಅರೆ ಸರ್ಕಾರಿ ಪತ್ರ.
2. ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರ ಪತ್ರದ ಸಂ:ಎಲ್‌ಎನ್‌ಡಿ:ಸಸ:ಸಿಆರ್:490/ 07–08, ದಿನಾಂಕ: 24.10.2007.
3. ಈ ಕಛೇರಿ ಸಮ ಸಂಖ್ಯೆ ತಿಳುವಳಿಕೆ ಪತ್ರದ ದಿನಾಂಕ: 03.06.2008.
4. ಮುಖ್ಯ ಸಂಚಾರ ವ್ಯವಸ್ಥಾಪಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆರವರ ಪತ್ರ ಸಂಖ್ಯೆ: ಬೆಂಮಸಾಸಂ:ಕೇಕ:ವಾಣಿಜ್ಯ:ಆಸ್ತಿ:1317/08–09 ದಿನಾಂಕ:16.08.2008.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೂ ಖುಲ್ಲಾ ಪಡಿಸಲಾಗಿರುವ 3,313–28 ಎಕರೆ/ಗುಂಟೆ ಸರ್ಕಾರಿ ಜಮೀನನ್ನು ಸರ್ಕಾರಿ/ಸಾರ್ವಜನಿಕ ಉಪಯೋಗಕ್ಕಾಗಿ ಸಂಬಂಧಿಸಿದ ಸಂಸ್ಥೆಗೆ ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನೆಲೆಯಲ್ಲಿ, ಉಲ್ಲೇಖ(1)ರಲ್ಲಿನ ಸರ್ಕಾರದ ನಡವಳಿ ಸಂಖ್ಯೆ:ಆರ್‌ಡಿ 265:ಎಲ್‌ಜಿಬಿ/2007 (ಭಾ–6), ಬೆಂಗಳೂರು ದಿನಾಂಕ:18.10.2007 ರ ಆದೇಶದಲ್ಲಿ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಜಮೀನು ಮಂಜೂರು ಮಾಡಲು ನಿರ್ದೇಶನವಾಗಿರುತ್ತದೆ. ಕಾಯ್ದಿರಿಸಿದ ಜಮೀನುಗಳ ಸ್ವಾಧೀನ ನೀಡಲು ಸಾಧ್ಯವಾಗದ ಕಾರಣ ದಿನಾಂಕ:11.12.2007 ಮತ್ತು 22.04.2008ರ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿ, ಬದಲಿ ಜಮೀನನ್ನು ಸಂಸ್ಥೆಗೆ ಸ್ವಾಧೀನ ನೀಡಲು, ದಿನಾಂಕ:13.05.2008ರ ಸರ್ಕಾರದ ಪತ್ರದಲ್ಲಿ ಪೂರ್ವಾನುಮೋದನೆ ನೀಡಲಾಗಿದೆ. ಅದರಂತೆ ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಚೀಮಸಂದ್ರ ಗ್ರಾಮದ ಸ.ನಂ. 83 ರಲ್ಲಿನ 3–25 ಎಕರೆ/ಗುಂಟೆ ಜಮೀನನ್ನು ಪೂರ್ಣ

ಮಾರುಕಟ್ಟೆ ಮೌಲ್ಯದ ಶೇ.50ರಷ್ಟು ಮಾರುಕಟ್ಟೆ ಬೆಲೆ ನಿಗದಿಪಡಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 20(1)(ಸಿ) ಅನ್ವಯ ಮಂಜೂರಾತಿ ಮಾಡಲು ಸರ್ಕಾರ ತನ್ನ ಅನುಮತಿ ನೀಡಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ, ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ರವರಿಗೆ ಜಮೀನಿನ ಕಿಮ್ಮತ್ತು ಮತ್ತು ಇತರೆ ಶುಲ್ಕ ಸೇರಿ ಒಟ್ಟು ರೂ. 30,24,175–00 (ಮೂವತ್ತು ಲಕ್ಷದ ಇಪ್ಪತ್ತನಾಲ್ಕು ಸಾವಿರದ ಒಂದು ನೂರ ಎಪ್ಪತ್ತೈದು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ಉಲ್ಲೇಖ (3)ರಂತೆ ತಿಳುವಳಿಕೆ ಪತ್ರವನ್ನು ನೀಡಲಾಗಿರುತ್ತದೆ. ಅದರಂತೆ ಮೇಲ್ಕಂಡ ಸಂಸ್ಥೆಯವರು ಸರ್ಕಾರಕ್ಕೆ ಚಲನ್ ನಂ.5,4 ಮತ್ತು 7 ರಂತೆ ದಿನಾಂಕ:08–08–2008 ರಂದು ಹಣ ಸಂದಾಯ ಮಾಡಿ, ಮೂಲ ಚಲನ್ ಹಾಜರುಪಡಿಸಿದ್ದು, ನಕ್ಷೆಯೊಂದಿಗೆ ಸಂಸ್ಥೆಗೆ ಜಮೀನನ್ನು ಹಸ್ತಾಂತರಿಸುವಂತೆ ಉಲ್ಲೇಖ(4)ರ ಪತ್ರದಲ್ಲಿ ಕೋರಿರುತ್ತಾರೆ.

ಉಲ್ಲೇಖ (1) ರ ಸರ್ಕಾರದ ಆದೇಶದಂತೆ ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಚೀಮಸಂದ್ರ ಗ್ರಾಮದ ಸ.ನಂ. 83 ರಲ್ಲಿನ 3–25 ಎಕರೆ/ಗುಂಟೆ ಸರ್ಕಾರಿ ಗೋಮಾಳ ಎಂದು ವರ್ಗೀಕೃತವಾದ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು 1969ರ ನಿಯಮ 20(1)(ಸಿ) ರನ್ವಯ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

**ಷರತ್ತುಗಳು**

1. ಈ ಜಮೀನಿನ ಮಂಜೂರಾತಿಯು 1969 ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.
2. ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.
3. ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ. ಸಂಸ್ಥೆಗೆ ಮಂಜೂರಾದ ಭೂಮಿಯನ್ನು ಬೇರೆ ಯಾರಿಗೂ ಗುತ್ತಿಗೆ, ಅಧಾರ, ಭೋಗ್ಯಕ್ಕೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನನ್ನು ಯಾವುದೇ ಬ್ಯಾಂಕ್/ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯುವ ಉದ್ದೇಶಕ್ಕೆ ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತಿರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ಸಂಸ್ಥೆ ಮತ್ತು ಇತರೆ ಪ್ರಾಧಿಕಾರಗಳು ಮುಟ್ಟು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.
4. ಯಾವ ಉದ್ದೇಶಕ್ಕಾಗಿ ಮಂಜೂರಾತಿ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.
5. ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.
6. ಈ ಮಂಜೂರಾತಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
7. ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವೆಂದು ಕಂಡುಬಂದಲ್ಲಿ ಮೂರು ತಿಂಗಳ ನೋಟೀಸನ್ನು ಕೊಟ್ಟು ತರುವಾಯ ಹಿಂತೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಅಭಿವೃದ್ಧಿಪಡಿಸಿದ ಬಾಬ್ತು ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.
8. ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಗೆ ನಿಗಧಿತ ಶುಲ್ಕ ಸಂದಾಯ/ತೆರಿಗೆ ಸಂದಾಯ ಮಾಡಿ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.
9. ಶಾಸನಬದ್ಧ ಕಾಯ್ದೆಗಳ ಕಟ್ಟುಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.
10. ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆ ಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.
11. ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
12. ಈ ಜಮೀನಿನಲ್ಲಿ ದೊಡ್ಡ ಮತ್ತು ಸಣ್ಣ ಕೆರೆಕಟ್ಟೆ ಇತ್ಯಾದಿಗಳಿದ್ದಲ್ಲಿ ನಕಾಶೆ ದಾರಿಗಳಿದ್ದಲ್ಲಿ ಸಾರ್ವಜನಿಕ ಆಸ್ತಿಯನ್ನು ಸಂರಕ್ಷಿಸಿ ನಿರ್ವಹಿಸತಕ್ಕದ್ದು. ಇವುಗಳ ಮೇಲೆ ಮಂಜೂರುದಾರರಿಗೆ ಯಾವುದೇ ಹಕ್ಕು ಇರುವುದಿಲ್ಲ.
13. ಅರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 28(2) ರಡಿಯಲ್ಲಿ ನಿಗಧಿಪಡಿಸಿರುವ ನಮೂನೆ/ಫಾರಂ–VIರಲ್ಲಿ ಕರಾರು ಪತ್ರವನ್ನು ಬರೆದುಕೊಡತಕ್ಕದ್ದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ, ಈ ಭೂ ಮಂಜೂರಾತಿಯು ತನಗೆ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಅರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗಿರುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 434

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ: ಎಲ್.ಆರ್.ಎಫ್(ಎ)(109)ಸಿ.ಆರ್:6/08–09, ದಿನಾಂಕ: 7ನೇ ಅಕ್ಟೋಬರ್ 2008**

**ವಿಷಯ:** ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಹೆಲ್ತ್ ಮ್ಯಾನೇಜ್‌ಮೆಂಟ್ ರೀಸರ್ಚ್, ನಂ.52/1, ಕೂಡ್ಲಗೇಟ್, ಹೊಸೂರು ಮೈನ್ ರೋಡ್, ಬೆಂಗಳೂರು 560068 ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಹುಲಿಮಂಗಲ ಗ್ರಾಮದ ಸ.ನಂ. 319 (ಹೊಸ ಸ.ನಂ.319/1) ರಲ್ಲಿ 0–15 ಗುಂಟೆ ಜಮೀನನ್ನು ಹೆಲ್ತ್ ಇನ್‌ಸ್ಟಿಟ್ಯೂಟ್‌ಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಹೆಲ್ತ್ ಮ್ಯಾನೇಜ್‌ಮೆಂಟ್ ರೀಸರ್ಚ್, ನಂ.52/1, ಕೂಡ್ಲುಗೇಟ್, ಹೊಸೂರು ಮೈನ್ ರೋಡ್, ಬೆಂಗಳೂರು 560068 ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಹುಲಿಮಂಗಲ ಗ್ರಾಮದ ಸ.ನಂ. 319 (ಹೊಸ ಸ.ನಂ.319/1) ರಲ್ಲಿ 0–15 ಗುಂಟೆ ಜಮೀನನ್ನು ಹೆಲ್ತ್ ಇನ್‌ಸ್ಟಿಟ್ಯೂಟ್‌ಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ–15ಎ ಮತ್ತು ನಮೂನೆ–15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗ ರವರ ಪತ್ರದ ನಂ: ಎಲ್.ಆರ್.ಎಫ್ (109) ಸಿ.ಆರ್:4/08–09, ದಿನಾಂಕ: 26.09.2008 ರಲ್ಲಿ ಪ್ರಸ್ತಾವಿತ ಹುಲಿಮಂಗಲ ಗ್ರಾಮದ ಸ.ನಂ. 319 (ಹೊಸ ಸ.ನಂ.319/1) ರಲ್ಲಿ 0–15 ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (1)(11) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ನಂ.356/84–85, ದಿನಾಂಕ: 5.10.1984 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾವಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ.109 ರ ಪ್ರಕಾರ ಹೆಲ್ತ್ ಇನ್‌ಸ್ಟಿಟ್ಯೂಟ್‌ಗೆ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995 ರ ಪ್ರಕಾರ ಕಲಂ 109 (1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಹುಲಿಮಂಗಲ ಗ್ರಾಮದ ಸ.ನಂ. 319 (ಹೊಸ ಸ.ನಂ.319/1) ರಲ್ಲಿ 0–15 ಗುಂಟೆ ಜಮೀನನ್ನು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಹೆಲ್ತ್ ಮ್ಯಾನೇಜ್‌ಮೆಂಟ್ ರೀಸರ್ಚ್, ನಂ.52/1, ಕೂಡ್ಲಗೇಟ್, ಹೊಸೂರು ಮೈನ್ ರೋಡ್, ಬೆಂಗಳೂರು 560068 ರವರಿಗೆ ಹೆಲ್ತ್ ಇನ್‌ಸ್ಟಿಟ್ಯೂಟ್‌ಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (1) (11) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ: ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003 ರಂತೆ ಹೆಲ್ತ್ ಇನ್‌ಸ್ಟಿಟ್ಯೂಟ್‌ಗೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೇಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ

ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಹೆಲ್ತ್ ಇನ್‌ಸ್ಟಿಟ್ಯೂಟ್‌ಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964 ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 435

**ಉಪವಿಭಾಗಾಧಿಕಾರಿಯವರ ಕಾರ್ಯಾಲಯ, ದಾವಣಗೆರೆ ಉಪವಿಭಾಗ, ದಾವಣಗೆರೆ**

**ತಿದ್ದುಪಡಿ ಅಧಿಸೂಚನೆ**

**ಸಂ:ಎಲ್‌ಎಕ್ಯೂ.ಎಸ್‌ಆರ್.1/08–09, ದಿನಾಂಕ: 23ನೇ ಅಕ್ಟೋಬರ್ 2008**

ಹರಿಹರ ತಾಲ್ಲೂಕು ಮಲೆಬೆನ್ನೂರು ಹೋಬಳಿ ನಂದಿಗುಡಿ ಗ್ರಾಮದ ರಿ.ಸ.ನಂ.12/ಪಿ–ಪಿ3ರಲ್ಲಿ 1–00 ಎಕರೆ ಜಮೀನನ್ನು ಲೋಕೋಪಯೋಗಿ ಇಲಾಖೆ ಪ್ರವಾಸಿ ಮಂದಿರದ ಸಲುವಾಗಿ ಭೂ ಸ್ವಾಧೀನ ಪಡಿಸಿಕೊಳ್ಳುತ್ತಿರುವ ಪ್ರಕರಣದಲ್ಲಿ ಹೊರಡಿಸಲಾದ ಭೂ ಸ್ವಾಧೀನ ಕಾಯ್ದೆಯ ಕಲಂ–4(1)ರ ಪ್ರಾಥಮಿಕ ಅಧಿಸೂಚನೆ ಸಂ:ಎಲ್‌ಎಕ್ಯೂ.ಸಿಆರ್.55/07–08, ದಿನಾಂಕ: 15.7.2008 ರ ಅಧಿಸೂಚನೆಯಲ್ಲಿ ಕೆಲವು ತಪ್ಪುಗಳಾಗಿದ್ದು, ಅವುಗಳನ್ನು ಈ ಕೆಳಕಂಡ ತಃಖ್ತೆಯಲ್ಲಿ ತೋರಿಸಿರುವಂತೆ ಸರಿಪಡಿಸಿಕೊಂಡು ಓದಿಕೊಳ್ಳತಕ್ಕದ್ದು.

| ಕ್ರಮಸಂಖ್ಯೆ ಮತ್ತು ಕಾಲಂ ಸಂಖ್ಯೆ | ತಪ್ಪಾಗಿ ಮುದ್ರಣ ಗೊಂಡಿರುವುದು | ಸರಿಪಡಿಸಿಕೊಂಡು ಓದುವ ವಿಷಯ |
|---|---|---|
| ಕ್ರ.ಸಂ. 1, ಕಾಲಂ–4ರಲ್ಲಿ | 2/ಪಿ–ಪಿ3 | 12/ಪಿ–ಪಿ3 |

ಉಪವಿಭಾಗಾಧಿಕಾರಿ ಹಾಗೂ ಭೂಸ್ವಾಧೀನಾಧಿಕಾರಿ,
ದಾವಣಗೆರೆ ಉಪವಿಭಾಗ.

ಪಿ.ಆರ್. 437

**OFFICE OF THE DEPUTY COMMISSIONER, CHIKKABALLAPUR DISTRICT, CHIKKABALLAPUR**

**Preliminary Notification dated : 07/18th November 2008**

No. DUDC/C(1)/CR/87/2008-09, Where as the Deputy Commissioner, Chikkaballapur District, Chikkaballapur is satisfied that (i) the area situated survey No. 4 Kanampalli village Kasaba Hobli, Chintamani extended boundaries and other details of which are specified is Schedule below situated within the limits of City Municipality of Chintamani Taluk, Chikkaballapur District area is a source of danger to the health, safety and convenience of the public of the area and of its neighbourhood by reason of the said area being insanitary, squalid and over crowded.

The buildings in the said area used or intended to be used for houses – habitation are over crowded and unfit for houses-habitation for want of repair, stability, freedom from damp, natural light and air, water supply, drainage and sanitary convenience.

It is hereby notified for the information of all the persons interested in the said area that in exercise of the power delegated in Government Notification No. HUD 49 MSC 83 dated 17th April 1986 to exercise of the powers under Section 3 (P) of the Karnataka Slum area (improvement and clearance) Act 1973 (Karnataka Act 33 of 1974) propose to declare the area to be a slum area.

Any representation against the proposed action may be made in duplicate to the Deputy Commissioner, Chikkaballapur District, Chikkaballapur within 15 days from the date of publication of this Notification.

**SCHEDULE**

| Sl. No. | Name and location of the Slum | Name of the owner | PTS No. or S. No. | Extent A.-Gt. | Boundaries |
|---|---|---|---|---|---|
| 1 | Kanampalli | Gomala | 4 | 0.37 | **East :** Gramatana<br>**West :** Private Property<br>**North :** Kanampalli Main Road (4th Cross)<br>**South :** Private Property |

**ANWAR PASHA,**
Deputy Commissioner,
Chikkaballapur District.

**OFFICE OF THE DEPUTY COMMISSIONER, CHIKKABALLAPUR DISTRICT, CHIKKABALLAPUR**
**Preliminary Notification dated : 7/18TH November 2008**

No. DUDC/C(1)/CR/88/2008-09, Where as the Deputy Commissioner, Chikkaballapur District, Chikkaballapur is satisfied that (i) the area situated survey No. 190 Sriramanagara village Kasaba Hobli, Chintamani extended boundaries and other details of which are specified is Schedule below situated within the limits of City Municipality of Chintamani Taluk, Chikkaballapur District area is a source of danger to the health, safety and convenience of the public of the area and of its neighbourhood by reason of the said area being insanitary, squalid and over crowded.

The buildings in the said area used or intended to be used for houses – habitation are over crowded and unfit for houses-habitation for want of repair, stability, freedom from damp, natural light and air, water supply, drainage and sanitary convenience.

It is hereby notified for the information of all the persons interested in the said area that in exercise of the power delegated in Government Notification No. HUD 49 MSC 83 dated 17th April 1986 to exercise of the powers under Section 3 (P) of the Karnataka Slum area (improvement and clearance) Act 1973 (Karnataka Act 33 of 1974) propose to declare the area to be a slum area.

Any representation against the proposed action may be made in duplicate to the Deputy Commissioner, Chikkaballapur District, Chikkaballapur within 15 days from the date of publication of this Notification.

**SCHEDULE**

| Sl. No. | Name and location of the Slum | Name of the owner | PTS No. or S. No. | Extent A.-Gt. | Boundaries |
|---|---|---|---|---|---|
| 1 | Sriramanagara | Sarkari Gomala | 190 | 2.00 | **East :** C.V. Raman Private Property<br>**West :** Rathnaiah Property<br>**North :**Krishnappa Road (Chelur Road)<br>**South :** Rama Kunte |

**ANWAR PASHA,**
Deputy Commissioner,
Chikkaballapur District.

**OFFICE OF THE DEPUTY COMMISSIONER, CHIKKABALLAPUR DISTRICT, CHIKKABALLAPUR**
**Preliminary Notification dated : 7/18th November 2008**

No. DUDC/C(1)/CR/89/2008-09, Where as the Deputy Commissioner, Chikkaballapur District, Chikkaballapur is satisfied that (i) the area situated survey No. 15 Thimmasandra village Kasaba Hobli, Chintamani extended boundaries and other details of which are specified is Schedule below situated within the limits of City Municipality of Chintamani Taluk, Chikkaballapur District area is a source of danger to the health, safety and convenience of the public of the area and of its neighbourhood by reason of the said area being insanitary, squalid and over crowded.

The buildings in the said area used or intended to be used for houses – habitation are over crowded and unfit for houses-habitation for want of repair, stability, freedom from damp, natural light and air, water supply, drainage and sanitary convenience.

It is hereby notified for the information of all the persons interested in the said area that in exercise of the power delegated in Government Notification No. HUD 49 MSC 83 dated 17th April 1986 to exercise of the powers under Section 3 (P) of the Karnataka Slum area (improvement and clearance) Act 1973 (Karnataka Act 33 of 1974) propose to declare the area to be a slum area.

Any representation against the proposed action may be made in duplicate to the Deputy Commissioner, Chikkaballapur District, Chikkaballapur within 15 days from the date of publication of this Notification.

**SCHEDULE**

| Sl. No. | Name and location of the Slum | Name of the owner | PTS No. or S. No. | Extent A.-Gt. | Boundaries |
|---|---|---|---|---|---|
| 1 | Thimmasandra | Karabu | 15 | 2.20 | **East :** Private Property<br>**West :** Private Property<br>**North :** Road<br>**South :** Private Property (Chintamani – Siddlagatta Road) |

**ANWAR PASHA,**
Deputy Commissioner,
Chikkaballapur District.

**OFFICE OF THE DEPUTY COMMISSIONER, CHIKKABALLAPUR DISTRICT, CHIKKABALLAPUR**

**Preliminary Notification dated : 7/18th November 2008**

No. DUDC/C(1)/CR/90/2008-09, Where as the Deputy Commissioner, Chikkaballapur District, Chikkaballapur is satisfied that (i) the area situated survey No. 25 Tippunagara village Kasaba Hobli, Chintamani extended boundaries and other details of which are specified is Schedule below situated within the limits of City Municipality of Chintamani Taluk, Chikkaballapur District area is a source of danger to the health, safety and convenience of the public of the area and of its neighbourhood by reason of the said area being insanitary, squalid and over crowded.

The buildings in the said area used or intended to be used for houses – habitation are over crowded and unfit for houses-habitation for want of repair, stability, freedom from damp, natural light and air, water supply, drainage and sanitary convenience.

It is hereby notified for the information of all the persons interested in the said area that in exercise of the power delegated in Government Notification No. HUD 49 MSC 83 dated 17th April 1986 to exercise of the powers under Section 3 (P) of the Karnataka Slum area (improvement and clearance) Act 1973 (Karnataka Act 33 of 1974) propose to declare the area to be a slum area.

Any representation against the proposed action may be made in duplicate to the Deputy Commissioner, Chikkaballapur District, Chikkaballapur within 15 days from the date of publication of this Notification.

**SCHEDULE**

| Sl. No. | Name and location of the Slum | Name of the owner | PTS No. or S. No. | Extent A.-Gt. | Boundaries |
|---|---|---|---|---|---|
| 1 | Tippunagara | Karabu | 25 | 6.25 | **East :** Tippunagara main road<br>**West :** Road<br>**North :** Private Property & Road<br>**South :** Road |

**ANWAR PASHA,**
Deputy Commissioner,
Chikkaballapur District.

P.R. 466

**ನಮೂನೆ–27**

**ತಹಸೀಲ್ದಾರ್‌ರವರ ಕಾರ್ಯಾಲಯ, ಆನೇಕಲ್ ತಾಲ್ಲೂಕು**

**ಪ್ರಕಟಣೆ**

**ಸಂಖ್ಯೆ:ಎಲ್‌ಎನ್‌ಡಿ: ಸಿಆರ್: 526 08–09, ದಿನಾಂಕ: 13ನೇ ನವೆಂಬರ್ 2008**

1. ಕರ್ನಾಟಕ ರಾಜ್ಯ ಸರ್ಕಾರದ ನಿಯಮಗಳಂತೆ ಆನೇಕಲ್ ತಾಲ್ಲೂಕು ಕಸಬಾ ಹೋಬಳಿ ಇಂಡ್ಲವಾಡಿ ಗ್ರಾಮದ ಸ.ನಂ.50 ಸರ್ಕಾರಿ ತೋಪು ಜಮೀನಾಗಿರುತ್ತದೆ. ಅದರಂತೆ, ಇಂಡ್ಲವಾಡಿ ಗ್ರಾಮ ಸ.ನಂ.50ರಲ್ಲಿ 0–32 ಗುಂಟೆ ಜಮೀನನ್ನು ಸಾರ್ವಜನಿಕ ಉದ್ದೇಶಕ್ಕೆ ಕಾಯ್ದಿರಿಸಬೇಕಾಗಿರುವುದರಿಂದ ವಿಲೇವಾರಿ ಮಾಡಲು ಉದ್ದೇಶಿಸಿದ್ದು, ಸದರಿ ಜಮೀನು ಹಾಲಿ ಸಾರ್ವಜನಿಕ ಉಪಯೋಗಕ್ಕೆ ಅವಶ್ಯಕತೆ ಇರುವುದಿಲ್ಲ. ಆದುದರಿಂದ ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಕಲಂ 68 (1) ರೀತ್ಯಾ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ. ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಸರ್ಕಾರಿತೋಪು ಸ.ನಂ.50 ರಲ್ಲಿ 0–32 ಗುಂಟೆ ಜಮೀನನ್ನು ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಇವರಿಗೆ ಕಾಯ್ದಿರಿಸಬೇಕಾಗಿರುವುದರಿಂದ ಮತ್ತು ಸಾರ್ವಜನಿಕ ಉಪಯೋಗಕ್ಕೆ ಬೇಕಿಲ್ಲದಿರುವ ಪ್ರಯುಕ್ತ ಸದರಿ ಜಮೀನಿನ ಮೇಲೆ ಸಾರ್ವಜನಿಕ ಹಕ್ಕು ವೈಯಕ್ತಿಕ ಹಕ್ಕುಗಳು ನಿರ್ಗಮನಗೊಳ್ಳುತ್ತವೆ.

2. ಆದ ಪ್ರಯುಕ್ತ ಯಾವುದೇ ವ್ಯಕ್ತಿ ಅಂತಹ ಜಮೀನಿನ ಮೇಲೆ ಆಸಕ್ತಿ ಉಳ್ಳವರು ಅಂದರೆ ಸದರಿ ಸರ್ಕಾರಿ ತೋಪು ಸ.ನಂ. 50 ರಲ್ಲಿ 0–32 ಗುಂಟೆ ಜಮೀನನ್ನು ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ರವರಿಗೆ ಕಾಯ್ದಿರಿಸಬೇಕಾಗಿರುವುದರಿಂದ ಸದರಿ ಜಮೀನನ್ನು ವಿಲೇವಾರಿ ಮಾಡುವುದರಿಂದ ತೊಂದರೆಗೊಳಗಾಗುವವರು ಮತ್ತು ತೊಂದರೆಗೊಳಗಾಗಿರುವವರು ಈ ಪ್ರಕಟಣೆಯ ದಿನಾಂಕದಿಂದ 90 ದಿನಗಳ ಒಳಗಾಗಿ ಲಿಖಿತ ಮೂಲಕ ಆಕ್ಷೇಪಣೆಯನ್ನು ಆನೇಕಲ್ ತಾಲ್ಲೂಕು ತಹಸೀಲ್ದಾರ್ ರವರಿಗೆ ತಲುಪುವಂತೆ ಕಳುಹಿಸುವುದು. ಅಲ್ಲದೆ ನಿಗದಿತ ವೇಳೆಯಲ್ಲಿ ಯಾವುದೇ ಆಕ್ಷೇಪಣೆಗಳು ತಲುಪದಿದ್ದಲ್ಲಿ ಸದರಿ ಸರ್ಕಾರಿ ತೋಪು ಸ.ನಂ.50 ರಲ್ಲಿ 0–32 ಗುಂಟೆ ಜಮೀನನ್ನು ಸಾರ್ವಜನಿಕ ಉದ್ದೇಶಕ್ಕೆ ಅಂದರೆ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಉದ್ದೇಶಕ್ಕೆ ಕಾಯ್ದಿರಿಸಬೇಕಾಗಿರುವುದರಿಂದ ವಿಲೇವಾರಿ ಮಾಡುವ ಬಗ್ಗೆ ಯಾವುದೇ ಆಕ್ಷೇಪಣೆಗಳು ಇರುವುದಿಲ್ಲವೆಂದೂ ಪರಿಗಣಿಸಿ ಕಾನೂನು ರೀತ್ಯಾ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಷೆಡ್ಯೂಲ್**

| | | |
|---|---|---|
| **ಜಿಲ್ಲೆ:** ಬೆಂಗಳೂರು ನಗರ | **ತಾಲ್ಲೂಕು:** ಆನೇಕಲ್ | **ಗ್ರಾಮ:** ಇಂಡ್ಲವಾಡಿ |
| ಸ.ನಂ.50 | ವಿಸ್ತೀರ್ಣ 0–32 ಗುಂಟೆ | **ವರ್ಗೀಕರಣ :** ಸರ್ಕಾರಿ ತೋಪು |

**ಮೇರೆಗಳು (ಚೆಕ್ಕು ಬಂದಿ)**

| | |
|---|---|
| ಪೂರ್ವಕ್ಕೆ : ಸ.ನಂ. 47 | ಪಶ್ಚಿಮಕ್ಕೆ : ಹಳ್ಳ |
| ಉತ್ತರಕ್ಕೆ : ಸ.ನಂ. 49, 48 | ದಕ್ಷಿಣಕ್ಕೆ : ಹಳ್ಳ |

ತಹಸೀಲ್ದಾರ್,
ಆನೇಕಲ್ ತಾಲ್ಲೂಕು, ಆನೇಕಲ್.

ಪಿ.ಆರ್. 467

**ವಿಶೇಷ ತಹಶೀಲ್ದಾರರ ಕಛೇರಿ ಬ್ರಹ್ಮಾವರ ಉಡುಪಿ ಜಿಲ್ಲೆ**

**ನಂಬ್ರ: ಎಲ್ ಎನ್ ಡಿ/ ಪಿಪಿಡಿಆರ್ 32/2008–09, ದಿನಾಂಕ: 3ನೇ ನವೆಂಬರ್ 2008**

**ಭೂ ಕಂದಾಯ ಅಧಿನಿಯಮ ಕಲಂ 68(1)ನೇಯ ಪ್ರಕರಣ – ನಿಯಮ 94 ರನ್ವಯ**

**ಘೋಷಣೆ**

ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾಗಿರುವ ಸಾರ್ವಜನಿಕ ಪೊರಂಬೋಕು ಕೆರೆ ಜಮೀನಿನ ಭಾಗವು ಯಾವುದೇ ಸರಕಾರದ ಸ್ವತ್ತಾಗಿದೆಯೋ ಅದು ಸಾರ್ವಜನಿಕರ ಬಳಕೆಗಾಗಿ ಅವಶ್ಯವಿಲ್ಲವೆಂದು ರಾಜ್ಯ ಸರಕಾರಕ್ಕೆ ಕಂಡು ಬಂದಿದೆ.

ಈ ಪ್ರಯುಕ್ತ ಈಗ ಕರ್ನಾಟಕ ಸರಕಾರದವರು ಕರ್ನಾಟಕ ಭೂ ಕಂದಾಯ ಅಧಿನಿಯಮ 68 ನೇಯ ಪ್ರಕರಣದ (1) ನೇಯ ಉಪ ಪ್ರಕರಣದಿಂದ ಕೊಡ ಮಾಡಲಾದ ಅಧಿಕಾರಗಳನ್ನು ಉಪಯೋಗಿಸುತ್ತಾ, ಪೂರ್ವೋಕ್ತ ಪೋರಂಬೋಕು ಕೆರೆ ಜಮೀನಿನ ಭಾಗವು ಸಾರ್ವಜನಿಕ ಉಪಯೋಗಕ್ಕಾಗಿ ಅವಶ್ಯಕತೆ ಇಲ್ಲ ಮತ್ತು ಪೂರ್ವೋಕ್ತ ಸಾರ್ವಜನಿಕ ಪೋರಂಬೋಕು ಕೆರೆ ಜಮೀನಿನ ಭಾಗದಲ್ಲಿ ಅಥವಾ ಮೇಲೆ ಸಾರ್ವಜನಿಕ ಅಥವಾ ಎಲ್ಲಾ ವ್ಯಕ್ತಿಗಳಿಗೆ ಇರುವಂಥಹ ಹಕ್ಕುಗಳು ರದ್ದುಗೊಳ್ಳ ತಕ್ಕದ್ದೆಂದು ಈ ಮೂಲಕ ಘೋಷಿಸಿರುತ್ತಾರೆ.

2) ಪೂರ್ವೋಕ್ತ ಸಾರ್ವಜನಿಕ ಪೋರಂಬೋಕು ಕೆರೆ ಜಮೀನಿನ ಭಾಗದಲ್ಲಿ ಅಥವಾ ಮೇಲೆ ಹಾಯ್ದುಹೋಗುವ ಅಧಿಕಾರವನ್ನಲ್ಲದೆ ಇತರ ಯಾವೊಂದು ಹಿತಾಸಕ್ತಿಯನ್ನುಳ್ಳ ಅಥವಾ ಯಾವೊಬ್ಬ ವ್ಯಕ್ತಿಯು ಅಥವಾ ಇಂಥಾ ಪ್ರಸ್ತಾವದಿಂದ ಅನ್ಯಥಾ ಭಾದಿತವಾದ ಇತರ ಯಾವೊಂದು ಹಿತಾಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯು ಈ ತಿಳುವಳಿಕೆ ಪತ್ರವು (ನೋಟೀಸು) ಹೊರಟ ದಿನಾಂಕದಿಂದ ತೊಂಭತ್ತು ದಿನಗಳೊಳಗಾಗಿ ಜಿಲ್ಲೆಯ ಉಪಆಯುಕ್ತರಿಗೆ ಈ ಪ್ರಸ್ತಾವದ ಬಗ್ಗೆ ತನಗಿರುವ ಆಕ್ಷೇಪಗಳ ಕುರಿತು ಮತ್ತು ತನ್ನ ಹಿತಾಸಕ್ತಿ ಅಥವಾ ಹಕ್ಕಿನ ಸ್ವಭಾವ ಮತ್ತು ಅವುಗಳು ಯಾವ ರೀತಿಯಲ್ಲಿ ಅನ್ಯಥಾ ಭಾದಿತವಾಗಬಹುದು.

ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಬಗೆಗಿನ ಪರಿಹಾರದ ಮೊಬಲಗು ಮತ್ತು ವಿವರಗಳನ್ನು ಲಿಖಿತವಾಗಿ ಕೊಡತಕ್ಕದ್ದು ಮತ್ತು ಎಲ್ಲಾ ಆಕ್ಷೇಪಣೆಗಳು ಮತ್ತು ಹಕ್ಕುಗಳು ಉಕ್ತ ಪ್ರಕರಣದಲ್ಲಿ ಉಪಬಂಧಿಸಿದ ಪ್ರಕಾರ ವಾಸ ಯುಕ್ತವೆಂದು ಪರ್ಯಾಲೋಚಿಸಲ್ಪಡತಕ್ಕದ್ದು.

ಪೋರಂಬೋಕು ರಸ್ತೆ ಇತ್ಯಾದಿ ಭಾಗ ಇರುವ ಗ್ರಾಮದ ವಿವರ

ಗ್ರಾಮ : ಕೋಟತಟ್ಟು ಸ.ನಂ.ಬ್ರ: 98/7 ರಲ್ಲಿ

ತಾಲ್ಲೂಕು: ಉಡುಪಿ, ಜಿಲ್ಲೆ ಉಡುಪಿ.

ಪೋರಂಬೋಕು ಕೆರೆ ಜಮೀನಿನ :ಭಾಗ ಅಥವಾ ಭಾಗಗಳ ಸರಿ ಸುಮಾರು ವಿಸ್ತೀರ್ಣ 1.16 ಎಕ್ರೆ ಎಲ್ಲೆಗಳು :

ಉತ್ತರ : ಸರ್ವೆಲೈನ್

ದಕ್ಷಿಣ : ಸ.ನಂಬ್ರ 98/7ರ ಅಂಶ

ಪೂರ್ವ : ಸರ್ವೆಲೈನ್

ಪಶ್ಚಿಮ : ಸರ್ವೆಲೈನ್

ವಿಶೇಷ ತಹಶೀಲ್ದಾರ್
ಪಿ.ಆರ್. 468 ಬ್ರಹ್ಮಾವರ

**ತಹಸೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಯಲಹಂಕ ಉಪನಗರ, ಬೆಂಗಳೂರು**

**ಸಂಖ್ಯೆ: ಎಲ್.ಎನ್.ಡಿ. (ಎನ್‌ಎ): ಸಿಆರ್:560/2008–09**

**ಸಾರ್ವಜನಿಕ ಪ್ರಕಟಣೆ**

**ನಮೂನೆ–27**

**94ನೇ ನಿಯಮದ 68 (1)ನೇ ಪ್ರಕರಣದ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿದ ಸಾರ್ವಜನಿಕ ಸರ್ಕಾರಿ ಓಣಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ,

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮದ 1964 ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸಾರ್ವಜನಿಕ, ಓಣಿ ಭಾಗವು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಓಣಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದು ಎಂದು ಉದ್ದೇಶಿಸಿ, ಈ ಮೂಲಕ ಘೋಷಿಸುತ್ತದೆ.

2. ಸದರಿ ಜಮೀನಿನಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವುದೇ ಸಾರ್ವಜನಿಕನು ಅಥವಾ ಯಾವುದೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ 90 (ತೊಂಬತ್ತು) ದಿನಗಳೊಳಗೆ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಂ ಮಾಡಲಾದ ಮೊಬಲಗು ವಿವರಗಳನ್ನು ಜಿಲ್ಲೆಯ ಡೆಪ್ಯೂಟಿ ಕಮಿಷನರ್‌ರವರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೈಂಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಡೆಪ್ಯೂಟಿ ಕಮೀಷನರ್ ಪರಿಶೀಲಿಸತಕ್ಕದ್ದು.

**ಅನುಸೂಚಿ**

| | | |
|---|---|---|
| ಭಾಗ ಇತ್ಯಾದಿ ಇರುವ ಗ್ರಾಮಗಳು | : | ಬ್ಯಾಲಕೆರೆ |
| ತಾಲ್ಲೂಕು | : | ಬೆಂಗಳೂರು ಉತ್ತರ (ಅಪರ) |
| ಜಿಲ್ಲೆ | : | ಬೆಂಗಳೂರು ನಗರ |
| ಜಮೀನಿನ ಭಾಗದ ವರ್ಣನೆ | : | ಸರ್ಕಾರಿ ಓಣಿ<br>ಸ.ನಂ. 101 |
| ಜಮೀನಿನ ವಿಸ್ತೀರ್ಣ | : | 2.00 ಎಕರೆ |
| ಮೇರೆ | : | ಪೂರ್ವಕ್ಕೆ :ರೀ.ಸ.ನಂ.102<br>ಪಶ್ಚಿಮಕ್ಕೆ:ಸ.ನಂ.98<br>ಉತ್ತರಕ್ಕೆ:ಮಾವಳ್ಳಿಪುರದ ಗಡಿ<br>ದಕ್ಷಿಣಕ್ಕೆ:ರೀ.ಸ.ನಂ.80,98,99,100 |

ತಹಸೀಲ್ದಾರ್,
ಪಿ.ಆರ್. 469 ಬೆಂಗಳೂರು ಉತ್ತರ (ಅಪರ) ತಾಲ್ಲೂಕು,
ಯಲಹಂಕ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂಖ್ಯೆ: ಎಲ್‌ಎನ್‌ಡಿ [ಎನ್.ಎ] ಸಿಆರ್ 64/2006–07, 231/2005–06, ದಿನಾಂಕ: 18ನೇ ಅಕ್ಟೋಬರ್ 2008**

**ವಿಷಯ:** ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಯಲಹಂಕ ಹೋಬಳಿ, ಸಿಂಗನಾಯ್ಕನಹಳ್ಳಿ ಗ್ರಾಮದ ಸರ್ವೆ ನಂ : 111ರಲ್ಲಿ 9–20 ಎಕರೆ / ಗುಂಟೆ ಮತ್ತು ಸರ್ವೆ ನಂ : 112ರಲ್ಲಿ 25–20 ಎಕರೆ / ಗುಂಟೆ ಒಟ್ಟು 35–00 ಎಕರೆಯಲ್ಲಿ ವಿದ್ಯುತ್ ಸ್ವೀಕರಣಾ ಕೇಂದ್ರ ಸ್ಥಾಪನೆಗೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರಿಗೆ ಜಮೀನು ಮಂಜೂರಾತಿ ಕೋರಿರುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಪತ್ರ ಸಂಖ್ಯೆ : ಆರ್‌ಡಿ 707 ಎಲ್‌ಜಿಬಿ 2008, ದಿನಾಂಕ: 4.10.2008.
2. ಸರ್ಕಾರದ ಆದೇಶ ಪತ್ರ ಸಂಖ್ಯೆ : ಆರ್‌ಡಿ 633 ಎಲ್‌ಜಿಬಿ 2006, ದಿನಾಂಕ: 26.3.2007.
3. ಈ ಕಛೇರಿ ಪತ್ರ ಸಂಖ್ಯೆ : ಎಲ್‌ಎನ್‌ಡಿ [ಎನ್.ಎ.] ಸಿಆರ್ 231/2005–06, ದಿನಾಂಕ: 28.3.2007.
4. ಕಾರ್ಯನಿರ್ವಾಹಕ ಅಧಿಕಾರಿಗಳು, ಕೆ.ಪಿ.ಟಿ.ಸಿ.ಎಲ್. ರವರ ಪತ್ರ ಸಂಖ್ಯೆ: ಕಾಂನಿಇಂ [ವಿ] ಬೆಂ.ಬೃಕಾ.ಉವಿ ಸಿವಿಲ್ ಕ–127/2007–08/148–54, ದಿನಾಂಕ: 12.4.2007.
5. ಸರ್ಕಾರದ ಪತ್ರ ಸಂಖ್ಯೆ : ಆರ್‌ಡಿ 439 ಎಲ್‌ಜಿಬಿ 2007, ದಿನಾಂಕ: 14.3.2007, 18.4.2007, 12.6.2007 ಮತ್ತು 18.8.2007.
6. ಸರ್ಕಾರದ ಪತ್ರ ಸಂಖ್ಯೆ : ಆರ್‌ಡಿ 439 ಎಲ್‌ಜಿಬಿ 2007, ದಿನಾಂಕ: 4.6.2008.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಬೆಂಗಳೂರು ಉತ್ತರ [ಅಪರ] ತಾಲ್ಲೂಕು, ಯಲಹಂಕ ಹೋಬಳಿ, ಸಿಂಗನಾಯ್ಕನಹಳ್ಳಿ ಗ್ರಾಮದ ಸರ್ವೆ ನಂ : 111ರಲ್ಲಿ 15–00 ಎಕರೆ, ಸರ್ವೆ ನಂ : 112ರಲ್ಲಿ 20–00 ಎಕರೆ ಒಟ್ಟು 35–00 ಎಕರೆ ಜಮೀನನ್ನು ವಿದ್ಯುತ್ ಸ್ವೀಕರಣಾ ಕೇಂದ್ರ ಸ್ಥಾಪನೆಗೆ ಕೆ.ಪಿ.ಟಿ.ಸಿ.ಎಲ್. ಸಂಸ್ಥೆಗೆ ಮಂಜೂರು ಮಾಡಲು ಸರ್ಕಾರಕ್ಕೆ ದಿನಾಂಕ: 30.6.2006ರಲ್ಲಿ ಪ್ರಸ್ತಾವನೆ ಸಲ್ಲಿಸಲಾಗಿತ್ತು. ತತ್ಸಂಬಂಧವಾಗಿ ಸರ್ಕಾರವು ಉಲ್ಲೇಖ [2]ರ ಪತ್ರದಲ್ಲಿ ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969 ನಿಯಮ 20 [1] [ಸಿ] ರನ್ವಯ ಪೂರ್ಣ ಮಾರುಕಟ್ಟೆ ಬೆಲೆ ಹಾಗೂ ಇತರೆ ಶುಲ್ಕ ವಿಧಿಸಿ ಮಂಜೂರು ಮಾಡಲು ಆದೇಶ ನೀಡಲಾಗಿತ್ತು. ಈ ಆದೇಶದನ್ವಯ ಈ ಕಛೇರಿಯ ಉಲ್ಲೇಖ [3]ರ ಪತ್ರ ದಿನಾಂಕ: 28.3.2007ರಲ್ಲಿ ಕಿಮ್ಮತ್ತು ಹಣ ರೂ. 28,69,00,325/– ಗಳನ್ನು ಪಾವತಿಸಲು ಕೆ.ಪಿ.ಟಿ.ಸಿ.ಎಲ್. ಸಂಸ್ಥೆಗೆ ತಿಳುವಳಿಕೆ ನೀಡಲಾಗಿತ್ತು.

ಈ ಕಛೇರಿಯಿಂದ ಹಣ ಪಾವತಿಗೆ ನೀಡಲಾದ ಪತ್ರಕ್ಕೆ ಅನುಗುಣವಾಗಿ ಕೆ.ಪಿ.ಟಿ.ಸಿ.ಎಲ್. ಸಂಸ್ಥೆಯು ಉಲ್ಲೇಖ [4] ರಂತೆ ದಿನಾಂಕ: 12.4.2007 ರಂದು ಪತ್ರ ನೀಡಿ ಪ್ರಸ್ತಾಪಿತ ಸಿಂಗನಾಯ್ಕನಹಳ್ಳಿ ಗ್ರಾಮದ ಸರ್ವೆ ನಂ : 111 ಮತ್ತು 112ರಲ್ಲಿ ಸಂಸ್ಥೆಗೆ ಒಂದೇ ಕಡೆ 40.00 ಎಕರೆ ಜಮೀನು ನೀಡಿದಲ್ಲಿ ವಿದ್ಯುತ್ ಸ್ವೀಕರಣಾ ಕೇಂದ್ರ ಸ್ಥಾಪನೆಗೆ ಅನುಕೂಲವಾಗುತ್ತದೆಂದು ಹಾಗೂ ಹಾಲಿ ಮಂಜೂರಾತಿಗೆ ಪ್ರಸ್ತಾಪಿಸಿರುವ ಸರ್ವೆ ನಂ : 111ರಲ್ಲಿ 15–00 ಎಕರೆ ಮತ್ತು ಸರ್ವೆ ನಂ : 112ಎರಲ್ಲಿ 20–00 ಎಕರೆ ಪ್ರದೇಶಗಳು ಒಂದಕ್ಕೊಂದು ಹೊಂದಿಕೊಂಡಿಲ್ಲದೆ ಇರುವುದರಿಂದ ಹಾಗೂ ಈ ಜಮೀನುಗಳ ಮಧ್ಯೆ ಸರ್ವೆ ನಂ : 112 ರಲ್ಲಿ ಬಿ.ಎಂ.ಟಿ.ಸಿ. ಸಂಸ್ಥೆಗೆ ಮಂಜೂರು ಮಾಡಿರುವ ಜಮೀನುಗಳು ಬರುವುದರಿಂದ ಬಿ.ಎಂ.ಟಿ.ಸಿ.ಗೆ ಸರ್ವೆ ನಂ : 112ರಲ್ಲಿ ಪ್ರಸ್ತಾಪಿಸಿರುವ ಜಮೀನನ್ನು ತಮ್ಮ ಸಂಸ್ಥೆಗೆ ನೀಡುವಂತೆಯೂ ಈ ಬಗ್ಗೆ ಬಿ.ಎಂ.ಟಿ.ಸಿ. ಸಂಸ್ಥೆಯು ಒಪ್ಪಿಗೆ ನೀಡಿರುವುದಾಗಿಯೂ ಕಾರಣ ಒಂದೇ ಕಡೆ 40–00 ಎಕರೆ ಜಮೀನನ್ನು ಮಂಜೂರು ಮಾಡುವ ಬಗ್ಗೆ ಪ್ರಸ್ತಾವನೆಯನ್ನು ಮಾರ್ಪಡಿಸಲು ಕೋರಿತ್ತು ಹಾಗೂ ಕೆ.ಪಿ.ಟಿ.ಸಿ.ಎಲ್ ಸಂಸ್ಥೆಯು ಈ ಕಛೇರಿಯ ಉಲ್ಲೇಖ [3]ರ ತಿಳುವಳಿಕೆಯಂತೆ ಸರ್ಕಾರದ ಉಲ್ಲೇಖ [2]ರ ಆದೇಶದಲ್ಲಿ ಮಂಜೂರಾತಿ ನೀಡಲಾಗಿದ್ದ ಸರ್ವೆ ನಂ : 111ರಲ್ಲಿನ 15–00 ಎಕರೆ ಹಾಗೂ ಸರ್ವೆ ನಂ : 112ರಲ್ಲಿನ 20–00 ಎಕರೆ ಒಟ್ಟು 35–00 ಎಕರೆ ಜಮೀನಿನ ಮಾರುಕಟ್ಟೆ ಬೆಲೆ ರೂ.28,61,00,325/– ಗಳನ್ನು ಪಾವತಿಸಿ ಚಲನ್ ಹಾಜರು ಪಡಿಸಿರುತ್ತದೆ.

ಸರ್ಕಾರವು ಉಲ್ಲೇಖ [5]ರ ದಿನಾಂಕ: 18.8.2007ರ ಪತ್ರದಲ್ಲಿ ಮಾನ್ಯ ಪ್ರಧಾನ ಕಾರ್ಯದರ್ಶಿಗಳು ಕಂದಾಯ ನಿರೀಕ್ಷಕರಾದ ಶ್ರೀ ನಾರಾಯಣರಾವ್, ಹಾಗೂ ಶ್ರೀ ನರೇಂದ್ರ ಮೋಜಣಿದಾರರು ಇವರಿಗೆ ನೀಡಿದ್ದು ನಿರ್ದೇಶನದನ್ವಯ ಪ್ರಸ್ತಾವನೆಯಲ್ಲಿನ ಸರ್ವೆ ನಂ : 111ರಲ್ಲಿ ಸರ್ಕಾರಕ್ಕೆ ಕಾಯ್ದಿರಿಸಬೇಕಾದ ವಿಸ್ತೀರ್ಣದ ಮಾಹಿತಿಯನ್ನೊಳಗೊಂಡಂತೆ ಪರಿಷ್ಕೃತ ಸ್ಕೆಚ್‌ನೊಂದಿಗೆ ಪ್ರಸ್ತಾವನೆಯನ್ನು ಈ ಕಛೇರಿಯ ಪತ್ರ ಸಮ ಸಂಖ್ಯೆ ದಿನಾಂಕ: 3.9.2007 ರಂದು ಸರ್ಕಾರಕ್ಕೆ ಸಲ್ಲಿಸಲಾಗಿತ್ತು.

ಕೆ.ಪಿ.ಟಿ.ಸಿ.ಎಲ್. ಸಂಸ್ಥೆಯು ಉಲ್ಲೇಖ [9] [10]ನ ರಂತೆ ಮನವಿ ಸಲ್ಲಿಸಿ ಸರ್ವೆ ನಂ : 111 ಮತ್ತು 112ರಲ್ಲಿ ಒಂದಕ್ಕೊಂದು ಹೊಂದಿಕೊಂಡಂತೆ ಒಂದೇ ಕಡೆ 35–00 ಎಕರೆ ಜಮೀನನ್ನು ಮಂಜೂರು ಮಾಡಲು ಒತ್ತಾಯಿಸಿರುವ ಮೇರೆಗೆ ಹಾಗೂ ಸಂಸ್ಥೆಯು ಈಗಾಗಲೇ 35–00 ಎಕರೆ ಜಮೀನಿಗೆ ಹಣ ಪಾವತಿಸಿರುವ ಕಾರಣ ಮತ್ತೊಮ್ಮೆ

ತಹಶೀಲ್ದಾರ್‌ರವರಿಂದ ಉಲ್ಲೇಖ [11]ರಲ್ಲಿ ಪುನರ್ ಪರಿಶೀಲನಾ ವರದಿ ಪಡೆದು ದಿನಾಂಕ: 20.8.2008 ರಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದು ಸರ್ಕಾರವು ಉಲ್ಲೇಖ [1]ರ ಪತ್ರದಲ್ಲಿ ಈ ಕೆಳಕಂಡಂತೆ ಆದೇಶ ನೀಡಿರುತ್ತದೆ.

ಸ್ಕೆಚ್‌ನಂತೆ ಸರ್ವೆ ನಂ : 112ರಲ್ಲಿನ ಉತ್ತರದ ಕಡೆ ಇರುವ 25–20 ಎಕರೆ / ಗುಂಟೆ ಮತ್ತು ಸರ್ವೆ ನಂ : 11ರ ಉತ್ತರದ ಕಡೆ ಇರುವ 9–20 ಎಕರೆ / ಗುಂಟೆ ಒಟ್ಟು 35–00 ಎಕರೆ ಜಮೀನನ್ನು ಕೆ.ಪಿ.ಟಿ.ಸಿ.ಎಲ್. ಸಂಸ್ಥೆಗೆ ಮಂಜೂರು ಮಾಡಲು ನಿರ್ದೇಶಿಸಲ್ಪಟ್ಟಿದೆ. ಪ್ರಸ್ತಾಪಿತ ಜಮೀನಿಗೆ ಕೆ.ಪಿ.ಟಿ.ಸಿ.ಎಲ್. ಸಂಸ್ಥೆಯು ಸರ್ಕಾರದ ಉಲ್ಲೇಖ [2]ರ ಆದೇಶದಂತೆ ಈಗಾಗಲೇ ಕಿಮ್ಮತ್ತು ಹಣ ರೂ. 28,00,00,000/– ಗಳನ್ನು ಚಲನ್ ಸಂಖ್ಯೆ : ಎಂ 77/38, ದಿನಾಂಕ : 24.4.2008ರಲ್ಲಿ ಭೂ ಪರಿವರ್ತನಾ ಶುಲ್ಕ ರೂ. 60,98,4000/–ಗಳನ್ನು ಚಲನ್ ಸಂಖ್ಯೆ : ಎಂ 77/39, ದಿನಾಂಕ : 24.4.2008 ಹಾಗೂ ಪೋಡಿ ಶುಲ್ಕ ರೂ. 1,925/–ಗಳನ್ನು ಚಲನ್ ಸಂಖ್ಯೆ : ಎಂ. 77/40, ದಿನಾಂಕ : 24.4.2008ರಲ್ಲಿ ಸರ್ಕಾರಕ್ಕೆ ಜಮಾ ಮಾಡಿರುತ್ತಾರೆ ಹಾಗೂ ಮಂಜೂರಾತಿ ಆದೇಶ ನೀಡಲು ಕೋರಿರುತ್ತಾರೆ.

ಆದ್ದರಿಂದ ಸರ್ಕಾರದ ಉಲ್ಲೇಖ [1]ರ ಆದೇಶದಂತೆ ಬೆಂಗಳೂರು ಜಿಲ್ಲೆ, ಬೆಂಗಳೂರು ಉತ್ತರ [ಅಪರ] ತಾಲ್ಲೂಕು ಯಲಹಂಕ ಹೋಬಳಿ, ಸಿಂಗನಾಯ್ಕನಹಳ್ಳಿ ಗ್ರಾಮದ ಸರ್ವೆ ನಂ : 111ರಲ್ಲಿನ ಉತ್ತರದ ಕಡೆ ಇರುವ 9–20 ಎಕರೆ / ಗುಂಟೆ ಮತ್ತು ಸರ್ವೆ ನಂ : 112ರ ಉತ್ತರದ ಕಡೆ ಇರುವ 25–20 ಎಕರೆ / ಗುಂಟೆ ಒಟ್ಟು 35–00 ಎಕರೆ ಜಮೀನು ಎರಡೂ ಸರ್ವೆ ನಂಬರ್‌ಗಳಲ್ಲಿ ಲಗತ್ತಾಗಿರುವ ಜಮೀನನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು 1969ರ ನಿಯಮ 20 [1] [ಸಿ] ರನ್ವಯ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಮಂಜೂರಾತಿ ಆದೇಶವನ್ನು ನೀಡಲಾಗಿದೆ.

1. ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.
2. ಈ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಉಪಯೋಗಿಸಿಕೊಳ್ಳಬೇಕು ಹಾಗೂ ಇನ್ನಿತರ ಉದ್ದೇಶಗಳಿಗಾಗಿ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.
3. ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿ ಮಾಡಿಸಿಕೊಳ್ಳತಕ್ಕದ್ದು.
4. ಪ್ರಶ್ನಿತ ಜಮೀನಿನ ಬಗ್ಗೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾಗಿದ್ದಲ್ಲಿ ಸರ್ಕಾರಕ್ಕೆ ಹಿಂತೆಗೆದುಕೊಳ್ಳಲಾಗುವುದು ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.
6. ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.
7. ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆ ಬಾಳುವ ನಿಧಿ ನಿಕ್ಷೇಪ ಇತ್ಯಾದಿಗಳು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.
8. ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
9. ಅರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 28 [2] ರಡಿಯಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಕರಾರು ಪತ್ರವನ್ನು ಬರೆದುಕೊಡತಕ್ಕದ್ದು.
10. ಶಾಸನಬದ್ಧ ಕಾಯ್ದೆಗಳ ಕಟ್ಟುಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ದವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.
11. ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘಿಸಿದಲ್ಲಿ ಈ ಭೂ ಮಂಜೂರಾತಿಯು ತಾನೇ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಅರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 439

## ಕಂದಾಯ ಸಚಿವಾಲಯ

## ಭೂ ಆರ್ಜನೆ 6(1) ಅಧಿನಿಯಮದ ಪ್ರಕರಣದ ಮೇರೆಗಿನ ಘೋಷಣೆ

**ಕ್ರಮಾಂಕ: ಕಂ.ಇ. 18 ಭೂ ಸ್ವಾ ಕೋ 2008, ದಿನಾಂಕ: 12ನೇ ನವೆಂಬರ್ 2008**

ಇದರ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವ ಭೂಮಿ ಒಂದು ಸಾರ್ವಜನಿಕ ಉದ್ದೇಶಕ್ಕಾಗಿ ಎಂದರೆ ಬಂಗಾರಪೇಟೆ ತಾಲ್ಲೂಕು ಪಾಕರಹಳ್ಳಿ ಗ್ರಾಮದ ಹಲವಾರು ಸ.ನಂ.ಗಳಲ್ಲಿ ಒಟ್ಟು 1.05 ಎಕರೆ ಜಮೀನನ್ನು ನಬಾರ್ಡು ಯೋಜನೆಯಡಿಯಲ್ಲಿ ರಸ್ತೆ ಅಭಿವೃದ್ಧಿಗಾಗಿ ಭೂ ಸ್ವಾಧೀನಪಡಿಸಿಕೊಳ್ಳುವ ಸಲುವಾಗಿ ನಮೂದಿಸಲಾದ ವಿಸ್ತೀರ್ಣದ ಜಮೀನುಗಳು ಅಗತ್ಯವಾಗಿದ್ದವು ಎಂದು ಕೋಲಾರ ಜಿಲ್ಲೆ ಜಿಲ್ಲಾಧಿಕಾರಿಯವರ ಕ್ರಮಾಂಕ: ಎಲ್ ಎಕ್ಯೂ ಎಸ್ ಆರ್ 2/2006–07, ದಿನಾಂಕ: 29.05.2006 ಸಂಖ್ಯೆಯ ಅಧಿಸೂಚನೆಯಲ್ಲಿ ಅಧಿಸೂಚಿಸಲಾಗಿದ್ದುದರಿಂದ.

ಕರ್ನಾಟಕ ಸರ್ಕಾರದವರು 1961ನೇ ಸಾಲಿನ ಕರ್ನಾಟಕ ಅಧಿನಿಯಮ ಕ್ರಮ ಸಂಖ್ಯೆ : 17 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣಾ ಅಧಿನಿಯಮ (1894ನೇ ಸಾಲಿನ ಕೇಂದ್ರದ ಅಧಿನಿಯಮ ರ 1) 5–ಎ ಪ್ರಕರಣದ (2)ನೇ ಉಪ ಪ್ರಕರಣದ ಮತ್ತು 6(1–ಎ) ರ ಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಯು ಪರಿಶೀಲಿಸಿದ ನಂತರ ಸದರಿ ಜಮೀನುಗಳನ್ನು ಮೇಲೆ ಹೇಳಿದ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಳ್ಳುವುದು ಅವಶ್ಯಕವೆಂದು ಪರಿಗಣಿಸಿದ್ದಾರೆ.

ಈ ಸದರಿ ಭೂ ಸಂಗ್ರಹಣಾ ಅಧಿನಿಯಮದ 6ನೇ ಪ್ರಕರಣದ ಮೇರೆಗೆ ಸದರಿ ಜಮೀನುಗಳು ಮೇಲಿನ ಉದ್ದೇಶಕ್ಕಾಗಿ ಬೇಕಾಗಬಹುದೆಂದು ಈ ಮೂಲಕ ಘೋಷಿಸಲಾಗಿದೆ.

ಉಪ ವಿಭಾಗಾಧಿಕಾರಿಗಳು, ಕೋಲಾರ ಇವರನ್ನು ಸದರಿ ಭೂಮಿಗೆ ಸಂಬಂಧಿಸಿದಂತೆ ಇನ್ನು ಮುಂದೆ ಕೈಗೊಳ್ಳುವ ಎಲ್ಲಾ ವ್ಯವಹರಣಗಳ ಕುರಿತಂತೆ ಜಿಲ್ಲಾಧಿಕಾರಿಯವರ ಪ್ರಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ಸದರಿ ಭೂ ಅರ್ಜನೆ ಅಧಿನಿಯಮದ 3ನೇ ಪ್ರಕರಣದ (ಸಿ) ಖಂಡದ ಮೇರೆಗೆ ಈ ಮೂಲಕ ನೇಮಕ ಮಾಡಲಾಗಿದೆ ಹಾಗೂ ಸದರಿ ಭೂಮಿಯ ಅರ್ಜನೆಗೆ ಸಂಬಂಧಿಸಿದ ಆದೇಶವನ್ನು ಪಡೆದುಕೊಳ್ಳಲು ಸದರಿ ಅಧಿನಿಯಮದ 7ನೇ ಪ್ರಕರಣದ ಮೇರೆಗೆ ನಿರ್ದೇಶನ ನೀಡಲಾಗಿದೆ.

ಸದರಿ ಭೂಮಿಗಳ ನಕಾಶೆಯನ್ನು ಪರಿವೀಕ್ಷಣೆಗಾಗಿ ಸಹಾಯಕ ಕಮೀಷನರ್, ಕೋಲಾರ ಉಪ ವಿಭಾಗ, ಕೋಲಾರ ರವರ ಕಛೇರಿಯಲ್ಲಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ಕೋಲಾರ **ತಾಲ್ಲೂಕು:** ಬಂಗಾರಪೇಟೆ **ಹೋಬಳಿ:** ಕಸಬಾ **ಗ್ರಾಮ:** ಪಾಕರಹಳ್ಳಿ

| ಕ್ರ. ಸಂ. | ಖಾತೆದಾರರ ಹೆಸರು/ಅನುಭವದಾರರ ಹೆಸರು | ಸ.ನಂ. | ತರಹೆ | ಚಕ್ಕುಬಂದಿ | | | | ಅಗತ್ಯವಿರುವ ಪ್ರದೇಶ ಮತ್ತು ವಿಸ್ತೀರ್ಣ ಎ.ಗುಂ. | ಮೌಲ್ಯ ನಿರ್ಧರಣೆ ರೂ. ಪೈ |
|---|---|---|---|---|---|---|---|---|---|
| | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | | |
| 1 | 1. ಎ.ಕೆ.ಮುನಿವೆಂಕಟ<br>2. ನಾರಾಯಣಪ್ಪ | 2 | ಖುಷ್ಕಿ | ಗ್ರಾಮಠಾಣ | ಗ್ರಾಮಠಾಣ | 2 | 2 ಮತ್ತು 3 | 0.04 | 0.16 |
| 2 | 1. ಎ.ಕೆ.ಚಿನ್ನಪ್ಪ ಬಿನ್ ಮುನಿಶಾಮಿ<br>2. ಸೀತಾರಾಮಪ್ಪ ಬಿನ್ ಮುನಿಯಪ್ಪ<br>3. ಚಂದ್ರಪ್ಪ ಬಿನ್ ಮುನಿಶಾಮಪ್ಪ<br>4. ತೋಟಿ ಇನಾಂತಿ | 3 | ಖುಷ್ಕಿ | ಗ್ರಾಮಠಾಣ | 2 | ಗ್ರಾಮಠಾಣ | 3 | 0.02 | 0.08 |

| ಕ್ರ. ಸಂ. | ಖಾತೆದಾರರ ಹೆಸರು/ಅನುಭವದಾರರ ಹೆಸರು | ಸ.ನಂ. | ತರಹೆ | ಚಕ್ಕುಬಂದಿ | | | | ಅಗತ್ಯವಿರುವ ಪ್ರದೇಶ ಮತ್ತು ವಿಸ್ತೀರ್ಣ ಎ.ಗುಂ. | ಮೌಲ್ಯ ನಿರ್ಧರಣೆ ರೂ. ಪೈ |
|---|---|---|---|---|---|---|---|---|---|
| | | | | ಪೂರ್ವ ಸ.ನಂ. | ಪಶ್ಚಿಮ ಸ.ನಂ. | ಉತ್ತರ ಸ.ನಂ. | ದಕ್ಷಿಣ ಸ.ನಂ. | | |
| 3. | 1. ಶ್ರೀನಿವಾಸಯ್ಯ, 2. ಕಾಂತಮ್ಮ 3. ಪಿ. ವೆಂಕಟೇಶಪ್ಪ | 4 | ಖುಷ್ಕಿ | ಸ.ನಂ.2 | ಸ.ನಂ. 5/1 | ಗ್ರಾಮಠಾಣ | ಸ.ನಂ. 4 | 0.01 1/2 | 0.06 |
| 4. | 1. ಮುನಿಯಪ್ಪ 2. ಲಕ್ಷ್ಮೀನಾರಾಯಣಪ್ಪ 3. ಲಕ್ಷ್ಮಣಮೂರ್ತಿ | 5/1 | ಖುಷ್ಕಿ | 4 | 5/2 | ಗ್ರಾಮಠಾಣ | 5/1 | 0.01 1/2 | 0.06 |
| 5. | 1. ರಂಗಪ್ಪ 2. ಸೀತಾರಾಮಶೆಟ್ಟಿ 3. ರಾಮಯ್ಯ | 5/2 | ಖುಷ್ಕಿ | 5/1 | ಗ್ರಾಮಠಾಣ | 5/2 | 5/2 | 0.03 | 0.12 |
| 6. | ಶಾಂತಮ್ಮ ಕೋಂ ಪಿ. ಕೃಷ್ಣಪ್ಪ | 6 | ಖುಷ್ಕಿ | ಗ್ರಾಮಠಾಣ | ಗ್ರಾಮಠಾಣ | ಗ್ರಾಮಠಾಣ | 6 | 0.01 | 0.04 |
| 7. | 1. ಪಿ. ಮುನಯ್ಯ 2. ಪಿ. ಕೃಷ್ಣಪ್ಪ ಬಿನ್ ಎಂ. ಪಾಪಯ್ಯ | 7/1 | ಖುಷ್ಕಿ | ಗ್ರಾಮಠಾಣ ಮತ್ತು 7/1 | ಓಣಿ | ಗ್ರಾಮಠಾಣ | 7/1 | 0.04 | 0.16 |
| 8. | 1. ಮುನೆಪ್ಪ ಉ:ಕದಿರೆಪ್ಪ 2. ನಾರಾಯಣಪ್ಪ (ಹುದುಕುಳ ಎಸ್.ಸಿ.ಎಸ್.ಗೆ ಅಧಾರ) | 96/5 | ಖುಷ್ಕಿ | ಓಣಿ | 97 | 96/5 | 96/6 | 0.14 | 0.38 |
| 9. | 1. ನಾಗರಾಜು ಬಿನ್ ಮುನಿಯಪ್ಪ 2. ಪದ್ಮ ಕೋಂ ನಾಗರಾಜು | 96/6 | ಖುಷ್ಕಿ | ಓಣಿ | 96/12 | 96/5 | 96/6 | 0.08 | 0.17 |
| 10. | 1. ಹನುಮಂತಪ್ಪ 2. ಬಿ. ವೆಂಕಟಸ್ವಾಮಿ | 96/12 | ಖುಷ್ಕಿ | 96/6 | ಕೂಟೇರಿ ಗಡಿ | 97 | 96/12 | 0.03 | 0.12 |
| 11. | 1. ಚೌಡಪ್ಪ ಬಿನ್ ಮುನೆಪ್ಪ 2. ಎಂ. ನಾರಾಯಣ 3. ಮುನಿವೆಂಕಟ 4. ಕುರಿಮುನಿಗಾ | 97 | ಖುಷ್ಕಿ | 96/5 ಮತ್ತು 12 | ಕೂಟೇರಿ ಗಡಿ | 97 | 96/12 | 0.03 | 0.12 |
| | | | | | | | ಒಟ್ಟು | 1.05 | |

**(ಒಟ್ಟು ವಿಸ್ತೀರ್ಣ ಒಂದು ಎಕರೆ ಐದು ಗುಂಟೆ)**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟೇಶಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾಧೀನ–2)

ಪಿ.ಆರ್. 462

